

# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | – | 890 (1132) |
| ಉತ್ತರಿಸಬೇಕಾದ ದಿನಾಂಕ | – | 13-03-2020 |
| ಸದಸ್ಯರ ಹೆಸರು | – | ಶ್ರೀ.ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವ ಸಚಿವರು | – | ಮಾನ್ಯ ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ಹಜ್ ಯಾತ್ರೆಗೆ ಹೋಗುವವರಿಗೆ ಸರ್ಕಾರ ಯಾವ ಯಾವ ಯೋಜನೆಗಳನ್ನು ರೂಪಿಸಿದೆ; | ಸರ್ಕಾರದ ವತಿಯಿಂದ ಹಜ್ ಯಾತ್ರಿಗಳಿಗೆ ವಿಶೇಷ ಯೋಜನೆಗಳು ಇರುವುದಿಲ್ಲ. ಕರ್ನಾಟಕ ರಾಜ್ಯ ಹಜ್ ಸಮಿತಿಯು, ಮುಂಬೈನ ಭಾರತೀಯ ಹಜ್ ಸಮಿತಿ ಹಾಗೂ ಯಾತ್ರಾರ್ಥಿಗಳ ನಡುವೆ ನೋಡಲ್ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತದೆ. ಮುಂಬೈನ ಭಾರತೀಯ ಹಜ್ ಸಮಿತಿಯು ಹಜ್ ಯಾತ್ರೆಗೆ ಪ್ರಯಾಣಿಸುವ ಆಸಕ್ತಿಯುಳ್ಳ ಯಾತ್ರಿಕರಿಂದ ಮಾರ್ಗಸೂಚಿಯೊಂದಿಗೆ ಅರ್ಜಿಗಳನ್ನು ಅಹ್ವಾನಿಸುತ್ತದೆ. ನಂತರ ಭರ್ತಿ ಮಾಡಿದ (ಆನ್ ಲೈನ್ ಒಳಪಟ್ಟು) ಅರ್ಜಿಗಳನ್ನು ಸ್ವೀಕರಿಸಿ ಹಾಗೂ ನಿಯಮಾನುಸಾರ ಖುರ್ರಾದ (ಲಾಟರಿ) ಮೂಲಕ ಪ್ರಸಕ್ತ ಸಾಲಿನ ಹಜ್ ಯಾತ್ರೆಗೆ ಯಾತ್ರಿಗಳನ್ನು ಆಯ್ಕೆ ಮಾಡಲಾಗುವುದು. ಕರ್ನಾಟಕ ರಾಜ್ಯ ಹಜ್ ಸಮಿತಿಯು ಹಜ್ ಯಾತ್ರಿಕರ ಸುಲಭ ಹಾಗೂ ಸುಖಕರ ಪ್ರಯಾಣಕ್ಕಾಗಿ ಹಜ್ ಕ್ಯಾಂಪ್‌ಗಳನ್ನು ಬೆಂಗಳೂರು ಮತ್ತು ಮಂಗಳೂರಿನಲ್ಲಿ ಅಯೋಜಿಸುತ್ತದೆ. ಹಜ್ ಪ್ರಯಾಣಕ್ಕೆ ಮುನ್ನ ಹಜ್ ಕ್ಯಾಂಪ್‌ನಲ್ಲಿ 2 ದಿನ ಉಳಿದುಕೊಳ್ಳಲು ವ್ಯವಸ್ಥೆ, ಯಾತ್ರೆಗೆ ಅನುವಾಗುವಂತೆ ಅವರ ದಾಖಲೆಗಳನ್ನು ನೀಡುವುದು, ಫಾರಿನ್ ಎಕ್ಸ್‌ಚೇಂಜ್ ವ್ಯವಸ್ಥೆ, ಹಾಗೂ ಇನ್ನಿತರೆ ಸೌಲಭ್ಯಗಳನ್ನು ನೀಡಲಾಗುವುದು. ವಿಮಾನ ನಿಲ್ದಾಣಗಳಿಂದ ನಿರ್ಗಮನ ಹಾಗೂ ಆಗಮನದ ಸಮಯದಲ್ಲಿ ಯಾತ್ರಿಕರಿಗೆ ಸಹಾಯ ಮತ್ತು ಸಹಕಾರ ನೀಡಲಾಗುತ್ತದೆ. ಆಯ್ಕೆಯಾದ ಹಜ್ ಯಾತ್ರಿಗಳಿಗಾಗಿ ಜಿಲ್ಲಾವಾರು ಚುಚ್ಚುಮದ್ದು/ಲಸಿಕೆ ಕಾರ್ಯಕ್ರಮಗಳನ್ನು ಅಯೋಜಿಸಿ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. |
| ಆ) | ಹಜ್ ಯಾತ್ರೆಗೆ ಹೋಗಿ ಬರಲು ಒಬ್ಬರಿಗೆ ಸರ್ಕಾರದಿಂದ ಭರಿಸುವ ಮೊತ್ತವೆಷ್ಟು ಹಾಗೂ ವಾರ್ಷಿಕವಾಗಿ ಎಷ್ಟು ಮಂದಿಗೆ ಅವಕಾಶ ಕಲ್ಪಿಸಲಾಗುತ್ತಿದೆ; ಈ ಯೋಜನೆಗಾಗಿ ಸರ್ಕಾರ ವಾರ್ಷಿಕ ಎಷ್ಟು ಅನುದಾನವನ್ನು ನೀಡುತ್ತಿದೆ: | ಕರ್ನಾಟಕ ರಾಜ್ಯ ಹಜ್ ಸಮಿತಿಯ ವತಿಯಿಂದ ಪ್ರತಿ ವರ್ಷ ಯಾತ್ರಾರ್ಥಿಗಳು ತಮ್ಮ ಸ್ವಂತ ಹಣದಿಂದ ಹಜ್ ಯಾತ್ರೆಗೆ ಪ್ರಯಾಣಿಸುತ್ತಾರೆ.<br><br>2019ನೇ ಸಾಲಿನ ಹಜ್‌ಗಾಗಿ ಕರ್ನಾಟಕ ರಾಜ್ಯ ಹಜ್ ಸಮಿತಿಯ ವತಿಯಿಂದ 8337 ಯಾತ್ರಿಕರು ಪ್ರಯಾಣ ಮಾಡಿರುತ್ತಾರೆ. |

| | | |
|---|---|---|
| | | ಕರ್ನಾಟಕ ರಾಜ್ಯ ಹಜ್ ಸಮಿತಿಯ ಸಿಬ್ಬಂದಿ ವೇತನ ಆಡಳಿತ ವೆಚ್ಚ ಹಾಗೂ ಹಜ್ ಕ್ಯಾಂಪ್ ಅಯೋಜನೆಗಾಗಿ 2019–20ನೇ ಸಾಲಿನಲ್ಲಿ ಸರ್ಕಾರವು ರೂ.240.00ಲಕ್ಷಗಳ ಅನುದಾನವನ್ನು ನೀಡಿರುತ್ತದೆ. ಸರ್ಕಾರವು ಹಜ್ ಯಾತ್ರಿಕರಿಗೆ ಯಾವುದೇ ಸಹಾಯಧನ ನೀಡುವುದಿಲ್ಲ. |
| ಇ) | ಹಜ್ ಯಾತ್ರೆಗೆ ಹೋಗಲು ಇರುವ ಮಾನದಂಡಗಳೇನು ? | ಹಜ್ ಯಾತ್ರೆಗೆ ಹೋಗಲು ಇರುವ ಮಾನದಂಡಗಳ ವಿವರ ಈ ಕೆಳಕಂಡಂತಿದೆ.<br>1. ಅರ್ಜಿದಾರನು ಭಾರತೀಯ ಮುಸ್ಲಿಂನಾಗಿದ್ದು, ಭಾರತೀಯ ಪಾಸ್‌ಪೋರ್ಟ್‌ನ್ನು ಹೊಂದಿರಬೇಕು.<br>2. ಅರ್ಜಿದಾರರು ಆರ್ಥಿಕವಾಗಿ, ದೈಹಿಕವಾಗಿ ಹಾಗೂ ಮಾನಸಿಕವಾಗಿ ಸದೃಡನಾಗಿರಬೇಕು.<br>3. ಮಹಿಳಾ ಅರ್ಜಿದಾರರು ಇಸ್ಲಾಂ ಧರ್ಮಕ್ಕೆ ಅನುಗುಣವಾಗಿ ಮೆಹ್ರಮ್ (ನಿರ್ಧಿಷ್ಟ ಪುರುಷ ಜೊತೆಗಾರ ಅಂದರೆ ಪತಿಯನ್ನು ಹೊರತು ಪಡಿಸಿ ಯಾವ ವ್ಯಕ್ತಿಯಿಂದ ಒಬ್ಬ ಮಹಿಳೆ ಮದುವೆಗೆ ಅರ್ಹಳಿಲ್ಲವೂ) ನೊಂದಿಗೆ ಅರ್ಜಿಯನ್ನು ಸಲ್ಲಿಸಬೇಕು.<br>ಹಜ್ ಯಾತ್ರೆಗಾಗಿ ಅರ್ಜಿಗಳು ಸ್ವೀಕೃತವಾದ ನಂತರ ಮುಂಬೈನ ಭಾರತೀಯ ಹಜ್ ಸಮಿತಿಯವರು, ಕೇಂದ್ರ ಸರ್ಕಾರದ ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯದ ಸಹಮತಿಯೊಂದಿಗೆ ಎಲ್ಲಾ ರಾಜ್ಯಗಳಿಗೂ ಕೋಟಾವನ್ನು ನಿಗಧಿಪಡಿಸುತ್ತಿದ್ದು, 2011ನ ಜನಗಣತಿಯ ವರದಿಯ ಅಧಾರದ ಮೇರೆಗೆ ಜಿಲ್ಲಾವಾರು ಯಾತ್ರಿಕರನ್ನು ಆನ್ ಲೈನ್ ಕಂಪ್ಯೂಟರ್ ಲಾಟರಿ ಮೂಲಕ ಆಯ್ಕೆ ಮಾಡಲಾಗುತ್ತದೆ. |

ಸಂಖ್ಯೆ:MWD 38 LMQ 2020

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್
ಮತ್ತು ವಕ್ಫ್ ಸಚಿವರು